## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: : 1866
2. ಸದಸ್ಯರ ಹೆಸರು : ಶ್ರೀ ಗೋವಿಂದರಾಜು
3. ಉತ್ತರಿಸಬೇಕಾದ ದಿನಾಂಕ: : 15-03-2022
4. ಉತ್ತರಿಸುವ ಸಚಿವರು : ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಮತ್ತು ಸಣ್ಣ ನೀರಾವರಿ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ನಗರ ಮತ್ತು ಜಿಲ್ಲಾ ಮಟ್ಟದಲ್ಲಿ ಸಾರ್ವಜನಿಕರು ಕೊಳವೆಬಾವಿಗಳನ್ನು ಕೊರೆಯಲು ಸರ್ಕಾರದ ಅನುಮತಿ ಪಡೆಯಬೇಕೇ; | ಬೆಂಗಳೂರು ನಗರ ಸೇರಿಕೊಂಡಂತೆ ರಾಜ್ಯದಲ್ಲಿನ 45 ಅತಿಬಳಕೆ ತಾಲ್ಲೂಕುಗಳಲ್ಲಿ ಕೊಳವೆಬಾವಿಗಳನ್ನು ಕೊರೆಯಲು ಆಯಾ ಜಿಲ್ಲೆಗಳಲ್ಲಿನ ಜಿಲ್ಲಾ ಅಂತರ್ಜಲ ಸಮಿತಿಯಿಂದ ಅನುಮತಿ ಪಡೆಯಬೇಕಾಗಿರುತ್ತದೆ. |
| ಆ | ಹಾಗಿದ್ದಲ್ಲಿ, ಅನುಮತಿಗಾಗಿ ಸರ್ಕಾರ ರೂಪಿಸಿರುವ ನೀತಿ ನಿಯಮಗಳೇನು; | ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆ ವಿನಿಯಮನ ಹಾಗೂ ನಿಯಂತ್ರಣ) ಅಧಿನಿಯಮ 2011ರ ಪ್ರಕರಣ 11ರಡಿಯಲ್ಲಿ ಅಧಿಸೂಚಿತ ಪ್ರದೇಶಗಳಲ್ಲಿ ಕೊಳವೆಬಾವಿಗಳನ್ನು ಕೊರೆಯಲು ಅನುಮತಿ ಪಡೆಯಬೇಕಾಗಿರುತ್ತದೆ. ಅದರಡಿಯಲ್ಲಿ ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆ ವಿನಿಯಮನ ಹಾಗೂ ನಿಯಂತ್ರಣ) ನಿಯಮಾವಳಿ 2012ರ ಉಪನಿಯಮ 6ರಲ್ಲಿ ಅರ್ಜಿ ಸಲ್ಲಿಸುವ ವಿಧಾನವನ್ನು ತಿಳಿಸಲಾಗಿರುತ್ತದೆ. ಇದರ ಉಧೃತ ಭಾಗವನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ. |
| ಎ | ಸರ್ಕಾರ ಇದಕ್ಕೆ ಸಂಬಂಧಿಸಿದಂತೆ ಯಾವುದಾದರೂ ಸಮಿತಿಯನ್ನು ರಚಿಸಿದೆಯೇ; | ಸಮಿತಿಗಳನ್ನು ರಚಿಸಲಾಗಿದೆ. |
| ಈ | ಸಮಿತಿ ರಚನೆಯಾಗಿದ್ದಲ್ಲಿ, ಈ ಸಮಿತಿಯಲ್ಲಿ ಯಾವ ಯಾವ ಇಲಾಖೆಯು ಒಳಗೊಂಡಿರುತ್ತದೆ. | ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಅಂತರ್ಜಲ ಪ್ರಾಧಿಕಾರ ಸಮಿತಿಯನ್ನು ರಚಿಸಲಾಗಿರುತ್ತದೆ. ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಪ್ರಧಾನ ಮುಖ್ಯ ಇಂಜಿನಿಯರ್, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿ ಅಧಿಸೂಚಿಸಲಾಗಿರುತ್ತದೆ. ಸದರಿ ಅಧಿಸೂಚನೆಯನ್ನು **ಅನುಬಂಧ-3** ರಲ್ಲಿ ನೀಡಲಾಗಿದೆ. |

| | | |
|---|---|---|
| ಉ | ಅನುಮತಿ ಪಡೆಯದೆ ಸಾರ್ವಜನಿಕರು ಕೊಳವೆಬಾವಿಗಳನ್ನು ಕೊರೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಊ | ಅನಧಿಕೃತ ಕೊಳವೆಬಾವಿಗಳನ್ನು ಕೊರೆಯುತ್ತಿರುವುದು ಕಂಡು ಬಂದರೂ ಅಧಿಕಾರಿಗಳು ಯಾವುದೇ ಕ್ರಮ ತೆಗೆದುಕೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅನುಮತಿ ಪಡೆಯದೇ ಕೊಳವೆಬಾವಿ ಕೊರೆಯುವುದು ಕಂಡು ಬಂದಲ್ಲಿ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತಿದೆ. |
| ಋ | ಬಂದಿದ್ದಲ್ಲಿ, ಇದುವರೆಗೂ ಎಷ್ಟು ಜನರ ಮೇಲೆ ಕ್ರಮವನ್ನು ತೆಗೆದುಕೊಳ್ಳಲಾಗಿದೆ? (ಸಂಪೂರ್ಣ ಮಾಹಿತಿ ನೀಡುವುದು) | ಕಳೆದ 05 ವರ್ಷಗಳಲ್ಲಿ ಕ್ರಮ ಕೈಗೊಂಡ ಬಗ್ಗೆ ವರದಿಯನ್ನು **ಅನುಬಂಧ-4** ರಲ್ಲಿ ನೀಡಲಾಗಿದೆ. |

ಸಂಖ್ಯೆ: **MID 52 LCQ 2022.**

**(ಜೆ.ಸಿ.ಮಾಧುಸ್ವಾಮಿ)**
ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನೆ ಮತ್ತು ಸಣ್ಣ ನೀರಾವರಿ ಸಚಿವರು.

ಅನುಬಂಧ -1

**ಕರ್ನಾಟಕ ಸರ್ಕಾರ**

ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ

ಸಂಖ್ಯೆ: ಸನೀಇ 09 ಅಜಅ 2015

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, 2ನೇ ಮಹಡಿ,
ಬೆಂಗಳೂರು, ದಿನಾಂಕ: 05.05.2020.

**ಅಧಿಸೂಚನೆ**

ರಾಜ್ಯದಲ್ಲಿ ಅಂತರ್ಜಲ ಅಭಿವೃದ್ಧಿಪಡಿಸುವ ಮತ್ತು ಅಂತರ್ಜಲ ಅತಿ ಬಳಕೆ ನಿಯಂತ್ರಣ ಮಾಡುವ ಸಲುವಾಗಿ ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣ) ಅಧಿನಿಯಮ 2011 (2011ರ ಕರ್ನಾಟಕ ಅಂತರ್ಜಲ ಅಧಿನಿಯಮ ಸಂಖ್ಯೆ 25)ನ್ನು ದಿನಾಂಕ: 20-06-2011 ರಿಂದ ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಂತೆ ಜಾರಿಗೆ ತರಲಾಗಿದೆ. ಸದರಿ ಅಧಿನಿಯಮ 3(1) ರನ್ವಯ ದಿನಾಂಕ: 16-03-2012 ರಂದು ಕರ್ನಾಟಕ ಅಂತರ್ಜಲ ಪ್ರಾಧಿಕಾರ ರಚಿಸಲಾಗಿದೆ.

ಮಾರ್ಚ್ 2017ರ ಅಂತ್ಯದ ಅಂತರ್ಜಲ ಮೌಲೀಕರಣ ವರದಿಯು ಕೇಂದ್ರ ಸರ್ಕಾರದ Ground Water Estimation Commiteeಯಿಂದ ಅನುಮೋದನೆಗೊಂಡಿದ್ದು, ಅದರಂತೆ ರಾಜ್ಯದ 45 ತಾಲ್ಲೂಕುಗಳನ್ನು ಅಂತರ್ಜಲ ಅತಿ ಬಳಕೆ ಎಂದು ವರ್ಗೀಕರಿಸಲಾಗಿದೆ. ರಾಜ್ಯದಲ್ಲಿ ಅಂತರ್ಜಲ ಅತಿ ಬಳಕೆ ಮತ್ತು ಜಲಮಟ್ಟ ಕುಸಿತವನ್ನು ತಡೆಯಲು ಜಾರಿಗೊಳಿಸಲಾದ ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣ) ಅಧಿನಿಯಮ 2011 ಮತ್ತು ನಿಯಮಾವಳಿ 2012ನ್ನು ಅನುಷ್ಠಾನಗೊಳಿಸಬೇಕಾಗಿರುತ್ತದೆ. ಸದರಿ ಅಧಿನಿಯಮದ ಪ್ರಕರಣ 10(3) ರಡಿ ಪ್ರದತ್ತವಾದ ಅಧಿಕಾರದನ್ವಯ ಮತ್ತು ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣ) ಅಧಿನಿಯಮ 2011ರಡಿ ರಚಿಸಲಾದ ಕರ್ನಾಟಕ ಅಂತರ್ಜಲ ಪ್ರಾಧಿಕಾರ ಸಭೆ ದಿ:12.11.2019ರಲ್ಲಿ ತೀರ್ಮಾನಿಸಿದಂತೆ ಅಂತರ್ಜಲ ಅತಿ ಬಳಕೆ ತಾಲ್ಲೂಕುಗಳೆಂದು ಗುರುತಿಸಿರುವ ಈ ಕೆಳಕಂಡ 45 ತಾಲ್ಲೂಕುಗಳಲ್ಲಿ ಅಂತರ್ಜಲ ಅಧಿನಿಯಮವನ್ನು ಅನುಷ್ಠಾನಗೊಳಿಸಲು ನಿರ್ಣಯಿಸಿ, ದಿ:05.08.2020ರಿಂದ ಜಾರಿಗೆ ಬರುವಂತೆ ಅಧಿಸೂಚಿಸಲಾಗಿದೆ.

| ಕ್ರ.ಸಂ. | ತಾಲ್ಲೂಕು | ಜಿಲ್ಲೆ |
|---|---|---|
| 1. | ಬಾದಾಮಿ | ಬಾಗಲಕೋಟೆ |
| 2. | ಬಾಗಲಕೋಟೆ | |
| 3. | ದೇವನಹಳ್ಳಿ | ಬೆಂಗಳೂರು ಗ್ರಾಮಾಂತರ |
| 4. | ದೊಡ್ಡ ಬಳ್ಳಾಪುರ | |
| 5. | ಹೊಸಕೋಟೆ | |
| 6. | ನೆಲಮಂಗಲ | |
| 7. | ಆನೇಕಲ್ | ಬೆಂಗಳೂರು ನಗರ |
| 8. | ಬೆಂಗಳೂರು ಪೂರ್ವ | |
| 9. | ಬೆಂಗಳೂರು ಉತ್ತರ | |
| 10. | ಬೆಂಗಳೂರು ದಕ್ಷಿಣ | |
| 11. | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ |
| 12. | ಚಿಂತಾಮಣಿ | |
| 13. | ಗೌರಿಬಿದನೂರು | |
| 14. | ಗುಡಿಬಂಡೆ | |
| 15. | ಶಿಡ್ಲಘಟ್ಟ | |
| 16. | ಬಾಗೇಪಲ್ಲಿ | |

ಸರ್ಕಾರದ ಅಧೀನ ಕಾರ್ಯದರ್ಶಿ
ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇ

| | | |
|---|---|---|
| 17. | ಅಥಣಿ | ಬೆಳಗಾವಿ |
| 18. | ರಾಮದುರ್ಗ | |
| 19. | ಸವದತ್ತಿ | |
| 20. | ಹಗರಿ ಬೊಮ್ಮನಹಳ್ಳಿ | ಬಳ್ಳಾರಿ |
| 21. | ಹರಪ್ಪನಹಳ್ಳಿ | |
| 22. | ಗುಂಡ್ಲುಪೇಟೆ | ಚಾಮರಾಜನಗರ |
| 23. | ಕಡೂರು | ಚಿಕ್ಕಮಗಳೂರು |
| 24. | ಚಿತ್ರದುರ್ಗ | ಚಿತ್ರದುರ್ಗ |
| 25. | ಹೊಳಲ್ಕೆರೆ | |
| 26. | ಹಿರಿಯೂರು | |
| 27. | ಹೊಸದುರ್ಗ | |
| 28. | ಚಳ್ಳಕೆರೆ | |
| 29. | ಜಗಳೂರು | ದಾವಣಗೆರೆ |
| 30. | ಚನ್ನಗಿರಿ | |
| 31. | ರೋಣ | ಗದಗ |
| 32. | ಗದಗ | |
| 33. | ಅರಸೀಕೆರೆ | ಹಾಸನ |
| 34. | ಬಂಗಾರಪೇಟೆ | ಕೋಲಾರ |
| 35. | ಕೋಲಾರ | |
| 36. | ಮಾಲೂರು | |
| 37. | ಮುಳಬಾಗಿಲು | |
| 38. | ಶ್ರೀನಿವಾಸಪುರ | |
| 39. | ರಾಮನಗರ | ರಾಮನಗರ |
| 40. | ಕನಕಪುರ | |
| 41. | ಚಿಕ್ಕನಾಯ್ಕನಹಳ್ಳಿ | ತುಮಕೂರು |
| 42. | ಕೊರಟಗೆರೆ | |
| 43. | ಮಧುಗಿರಿ | |
| 44. | ತಿಪಟೂರು | |
| 45. | ತುಮಕೂರು | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಎಂ.ಎಸ್ ಜ್ಯೋತಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ

<u>ಸಂಕಲನಕಾರರು:</u>

ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು – ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಿ ಅದರ 200 ಪ್ರತಿಗಳನ್ನು ಸಣ್ಣ ನೀರಾವರಿ ಇಲಾಖೆಗೆ ಒದಗಿಸುವಂತೆ ಕೋರಿದೆ.

<u>ಇವರಿಗೆ:</u>

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು.

ಅನುಬಂಧ-2

**6. 11 ನೇ ಪ್ರಕರಣದ ಅಡಿಯಲ್ಲಿ ಅರ್ಜಿಯ ವಿವರಗಳು ಮತ್ತು ಅರ್ಜಿ ಸಲ್ಲಿಸುವ ವಿಧಾನ:–**

(1) ಕುಡಿಯುವ ನೀರಿನ ಉದ್ದೇಶಕ್ಕಾಗಿ ಮತ್ತು ಕೃಷಿ ಉದ್ದೇಶಕ್ಕಾಗಿ ಅಧಿಸೂಚಿತ ಪ್ರದೇಶದಲ್ಲಿ ಬಾವಿ/ಕೊಳವೆಬಾವಿ ತೋಡುವುದಕ್ಕೆ/ ಕೊರೆಯುವುದಕ್ಕೆ ಮತ್ತು ಅಂತರ್ಜಲ ತೆಗೆಯಲು ಮತ್ತು ಬಳಸಲು ಪರ್ಮಿಟ್ ಮಂಜೂರಾತಿಗಾಗಿ ಅರ್ಜಿಯನ್ನು ನಮೂನೆ–1ಎ ನಲ್ಲಿ ಐವತ್ತು ರೂಪಾಯಿಗಳ ಶುಲ್ಕದ ಜೊತೆಯಲ್ಲಿ (ಅಧಿನಿಯಮದ ಪ್ರಕರಣ 11 ರ ಉಪ–ಪ್ರಕರಣ 2) ಮತ್ತು

(i) ಕೃಷಿ ಭೂಮಿಗೆ ಸಂಬಂಧವಾಗಿ, ಅಂತ ಕೃಷಿ ಭೂಮಿಯ ಮಾಲೀಕತ್ವಕ್ಕೆ ಸಂಬಂಧಿಸಿದಂತೆ ಹಕ್ಕು ದಾಖಲೆಯ ಉದ್ಧೃತ ಭಾಗಗಳು ( ಕರ್ನಾಟಕ ಭೂ ದಾಖಲೆಯ ಅಧಿನಿಯಮ 1964 ರಂತೆ)

(ii) ಗೃಹ ಬಳಕೆದಾರರ ಸಂಬಂಧವಾಗಿ, ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರದಿಂದ ನೀಡಿದ ಅಂಥ ಆಸ್ತಿಯ ಖಾತಾ ಪ್ರಮಾಣಪತ್ರ ಮತ್ತು ಸರ್ವೆ ನಂಬರ್, ವಿಳಾಸ ದಾಖಲೆ, ಸಂದರ್ಭಾನುಸಾರ ಸಂಬಂಧಪಟ್ಟ ಪುರಸಭಾ ನಿಗಮ, ಪಟ್ಟಣ ಪಂಚಾಯತಿ ಅಥವಾ ಗ್ರಾಮ ಪಂಚಾಯತಿಯಲ್ಲಿ ತೆರಿಗೆ ಪಾವತಿ ಮಾಡಿದ ರಶೀದಿಗಳು ಅಥವಾ ಕರ್ನಾಟಕ ಭೂ ದಾಖಲೆಯ ಅಧಿನಿಯಮ 1964 ರಂತೆ ಹಕ್ಕು ದಾಖಲೆಯ ಉದ್ಧೃತ ಭಾಗಗಳು, ಸೇರಿದಂತೆ ಆಸ್ತಿ ಮಾಲೀಕತ್ವಕ್ಕೆ ಸಂಬಂಧಿಸಿದ ದಾಖಲೆಗಳೊಂದಿಗೆ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

(2) ಕೈಗಾರಿಕಾ, ವಾಣಿಜ್ಯ ಅಥವಾ ಮನರಂಜನೆ ಉದ್ದೇಶಕ್ಕಾಗಿ ಅಧಿಸೂಚಿತ ಪ್ರದೇಶದಲ್ಲಿ ಬಾವಿ/ಕೊಳವೆಬಾವಿ ತೋಡುವುದಕ್ಕೆ/ ಕೊರೆಯುವುದಕ್ಕೆ ಮತ್ತು ಅಂತರ್ಜಲ ಹೊರ ತೆಗೆಯಲು ಮತ್ತು ಬಳಸುವುದಕ್ಕೆ ಪರ್ಮಿಟ್‌ಗಾಗಿ ಅರ್ಜಿಯನ್ನು ಐದು ನೂರು ರೂಪಾಯಿಗಳ ಶುಲ್ಕದೊಂದಿಗೆ (ಅಧಿನಿಯಮದ ಪ್ರಕರಣ 11 ರ ಉಪ–ಪ್ರಕರಣ 2) ನಮೂನೆ–1ಬಿ ನಲ್ಲಿ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು ಮತ್ತು ಅಂಥ ಕೈಗಾರಿಕಾ, ವಾಣಿಜ್ಯ, ಮನರಂಜನೆ ಸಂಸ್ಥೆಯ ಮಾಲಿಕತ್ವದ ಸಂಬಂಧವಾಗಿ ಸಕ್ಷಮ ಪ್ರಾಧಿಕಾರದಿಂದ ಮಂಜೂರು ಮಾಡಿದ ದಾಖಲೆಗಳನ್ನು ಜೊತೆಯಲ್ಲಿ ಲಗತ್ತಿಸತಕ್ಕದ್ದು.

(3) ಬಾವಿ/ಕೊಳವೆಬಾವಿ ತೋಡುವುದಕ್ಕೆ ಅಥವಾ ಕೊರೆಯುವುದಕ್ಕೆ ಮತ್ತು ಕೃಷಿ ಅಥವಾ ಕುಡಿಯುವ ನೀರಿನ ಉದ್ದೇಶಕ್ಕಾಗಿ ಅಂತರ್ಜಲ ತೆಗೆಯಲು ಮತ್ತು ಬಳಸಲು ಅನುಮತಿಗಾಗಿ ಅರ್ಜಿಯು ನಮೂನೆ–2ಎ ನಲ್ಲಿ ಇರತಕ್ಕದ್ದು ಮತ್ತು ನಿರಾಕರಣೆಯ ಆದೇಶವು ನಮೂನೆ–2ಬಿ ನಲ್ಲಿ ಇರತಕ್ಕದ್ದು. ಬಾವಿಗಳನ್ನು ತೋಡುವುದಕ್ಕೆ ಅಥವಾ ಕೊರೆಯುವುದಕ್ಕೆ ಮತ್ತು ಕೈಗಾರಿಕೆ ಮತ್ತು ಇತರ ಬಳಕೆಗಾಗಿ ಅರ್ಜಿಯು ನಮೂನೆ–3ಎ ನಲ್ಲಿ ಇರತಕ್ಕದ್ದು ಮತ್ತು ನಿರಾಕರಣೆಯ ಆದೇಶವು ನಮೂನೆ–3ಬಿ ನಲ್ಲಿ ಇರತಕ್ಕದ್ದು.

ಅನುಬಂಧ - 3



<u>ಕರ್ನಾಟಕ ಸರ್ಕಾರ</u>

<u>ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ</u>

ಸಂಖ್ಯೆ:ಸನೀಇ 19 ಅಜಅ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, 2ನೇ ಮಹಡಿ,
ಬೆಂಗಳೂರು, ದಿನಾಂಕ:17.04.2021.



## <u>ಅಧಿಸೂಚನೆ</u>

ರಾಜ್ಯದಲ್ಲಿ ಅಂತರ್ಜಲ ಅಭಿವೃದ್ಧಿ ಮತ್ತು ಅತಿಬಳಕೆ ನಿಯಂತ್ರಣ ಕುರಿತು ಜಾರಿಯಾಗಿರುವ ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣ) ಅಧಿನಿಯಮ 2011 ರ 3ನೇ ಪ್ರಕರಣ 1ನೇ ಉಪ ಪ್ರಕರಣದಡಿ ಪ್ರದತ್ತವಾದ ಅಧಿಕಾರದನ್ವಯ ಕರ್ನಾಟಕ ರಾಜ್ಯ ಸರ್ಕಾರವು ಇಡೀ ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಂತೆ ದಿ:16.03.2012ರಂದು ಕರ್ನಾಟಕ ಅಂತರ್ಜಲ ಪ್ರಾಧಿಕಾರವನ್ನು ರಚಿಸಲಾಗಿದೆ. ಸದರಿ ಅಧಿನಿಯಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಅಧಿಸೂಚನೆ ಸಂಖ್ಯೆ ಸನೀಇ 13 ಅಜಅ 2011, ದಿ:31.12.2012ರನ್ವಯ ರಚಿಸಲಾದ ಸಮಿತಿಯ ಅಧಿಸೂಚನೆಯನ್ನು ಹಿಂಪಡೆದು, 16 ಕಾರ್ಯ ನಿರ್ವಾಹಕರ ಇಂಜಿನಿಯರ್, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ (BWSSB) ಇವರನ್ನು ಒಳಗೊಂಡಂತೆ ಪ್ರಧಾನ ಮುಖ್ಯ ಇಂಜಿನಿಯರ್ ರವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡಂತೆ ಪರಿಷ್ಕೃತ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಪ್ರಧಾನ ಮುಖ್ಯ ಇಂಜಿನಿಯರ್,<br>ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ. | ಅಧ್ಯಕ್ಷರು |
| 2. | ಉಪ ಮುಖ್ಯಇಂಜಿನಿಯರ್,<br>ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು | ಸದಸ್ಯ ಕಾರ್ಯದರ್ಶಿಗಳು |
| 3. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಆಯುಕ್ತರ ಪ್ರತಿನಿಧಿಗಳು. | ಸದಸ್ಯರು |
| 4. | ಪೋಲೀಸ್ ಆಯುಕ್ತರು, ಬೆಂಗಳೂರು ಮಹಾನಗರ ಬೆಂಗಳೂರು ರವರ ಪ್ರತಿನಿಧಿಗಳು. | ಸದಸ್ಯರು |
| 5. | ವ್ಯವಸ್ಥಾಪಕ ನಿರ್ದೇಶಕರು, ಬೆಸ್ಕಾಂ, ಬೆಂಗಳೂರು ರವರ ಪ್ರತಿನಿಧಿ. | ಸದಸ್ಯರು |
| 6. | ಹಿರಿಯ ಭೂವಿಜ್ಞಾನಿ, ಜಿಲ್ಲಾ ಅಂತರ್ಜಲ ಕಛೇರಿ, ವಿಶ್ವೇಶರಯ್ಯ ಗೋಪುರ 13ನೇ ಮಹಡಿ, ಡಾ.ಬಿ.ಆರ್.ಅಂಬೇಡ್ಕರ್ ವೀದಿ, ಬೆಂಗಳೂರು ನಗರ ಜಿಲ್ಲೆ. | ಸದಸ್ಯರು |
| 7. | ಸಂಬಂಧಿಸಿದ ಪರಿಸರ ಅಧಿಕಾರಿ,<br>ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು. | ಸದಸ್ಯರು |
| 8. | ಕಾರ್ಯನಿರ್ವಾಹಕ ಇಂಜಿನಿಯರ್ ಕಛೇರಿ, ಕೇಂದ್ರ ವಿಭಾಗ, BWSSB, ವಿಲ್ಲರ್ಸ್ ರಸ್ತೆ, ಹೈಗ್ರೌಂಡ್, ಬೆಂಗಳೂರು-52. | ಸದಸ್ಯರು |
| 9. | ಕಾರ್ಯನಿರ್ವಾಹಕ ಇಂಜಿನಿಯರ್ ಕಛೇರಿ, ದಕ್ಷಿಣ ವಿಭಾಗ, BWSSB, 27ನೇ ಕ್ರಾಸ್, 4ನೇ ಬ್ಲಾಕ್, ಜಯನಗರ, ಬಿಡಿಎ ಕಾಂಪ್ಲೆಕ್ಸ್ ಹತ್ತಿರ, ಬೆಂಗಳೂರು-11. | ಸದಸ್ಯರು |
| 10. | ಕಾರ್ಯನಿರ್ವಾಹಕ ಇಂಜಿನಿಯರ್ ಕಛೇರಿ, ದಕ್ಷಿಣ-ಪಶ್ಚಿಮ (ನೈರುತ್ಯ) ವಿಭಾಗ, BWSSB, ಕಪಿಲ ಭವನ, 1ನೇ ಮುಖ್ಯರಸ್ತೆ, 36ನೇ ಅಡ್ಡರಸ್ತೆ, 'ಟಿ' ಬ್ಲಾಕ್, ಜಯನಗರ, ಅಂಚೆ ಕಛೇರಿ ಸಮೀಪ, ಬೆಂಗಳೂರು. | ಸದಸ್ಯರು |

...2...

| | | |
|---|---|---|
| 11. | ಕಾರ್ಯನಿರ್ವಾಹಕ ಇಂಜಿನಿಯರ್ ಕಛೇರಿ, ಪಶ್ಚಿಮ ವಿಭಾಗ, BWSSB, ಅರ್ಕಾವತಿ ಭವನ, 1ನೇ ಮಹಡಿ, 5ನೇ ಮುಖ್ಯರಸ್ತೆ, 9ನೇ ಅಡ್ಡರಸ್ತೆ, 2ನೇ ಹಂತ, ಆರ್‌ಪಿಸಿ ಲೇಔಟ್, ಬೆಂಗಳೂರು–40. | ಸದಸ್ಯರು |
| 12. | ಕಾರ್ಯನಿರ್ವಾಹಕ ಇಂಜಿನಿಯರ್, ಸೌತ್–ಈಸ್ಟ್–1 (ಆಗ್ನೇಯ–1) ವಿಭಾಗ, BWSSB, 1ನೇ ಅಡ್ಡರಸ್ತೆ, 10ನೇ ಮುಖ್ಯರಸ್ತೆ, 2ನೇ ಹಂತ, ಇಂದಿರಾ ನಗರ, ಬೆಂಗಳೂರು–38. | ಸದಸ್ಯರು |
| 13. | ಕಾರ್ಯನಿರ್ವಾಹಕ ಇಂಜಿನಿಯರ್ ಕಛೇರಿ, ಪೂರ್ವ ವಿಭಾಗ,BWSSB, 1ನೇ ಅಡ್ಡರಸ್ತೆ, 10ನೇ ಮುಖ್ಯರಸ್ತೆ, 2ನೇ ಹಂತ, ಇಂದಿರಾ ನಗರ, ಬೆಂಗಳೂರು–38. | ಸದಸ್ಯರು |
| 14. | ಕಾರ್ಯನಿರ್ವಾಹಕ ಇಂಜಿನಿಯರ್ ಕಛೇರಿ, ಉತ್ತರ ವಿಭಾಗ, BWSSB, ಪಿನಾಕಿನಿ ಭವನ, 2ನೇ ಮಹಡಿ, ದೊಡ್ಡಬಳ್ಳಾಪುರ ಮುಖ್ಯರಸ್ತೆ, ಯಲಹಂಕ, ಬೆಂಗಳೂರು–64. | ಸದಸ್ಯರು |
| 15. | ಕಾರ್ಯನಿರ್ವಾಹಕ ಇಂಜಿನಿಯರ್ ಕಛೇರಿ, ಉತ್ತರ–ಪೂರ್ವ (ಈಶಾನ್ಯ) ವಿಭಾಗ, BWSSB, ಸುವರ್ಣ ಭವನ, ನೆಲಮಹಡಿ, 18ನೇ ಮುಖ್ಯರಸ್ತೆ, ಮಲ್ಲೇಶ್ವರಂ, ಬೆಂಗಳೂರು–55. | ಸದಸ್ಯರು |
| 16. | ಕಾರ್ಯನಿರ್ವಾಹಕ ಇಂಜಿನಿಯರ್ ಕಛೇರಿ, ಉತ್ತರ–ಪಶ್ಚಿಮ–1 (ವಾಯವ್ಯ–1) ವಿಭಾಗ, BWSSB, ವೆಸ್ಟ್ ಆಫ್ ಕಾರ್ಡ್ ರಸ್ತೆ, 2ನೇ ಹಂತ, ಮೋದಿ ಆಸ್ಪತ್ರೆ ಹಿಂಭಾಗ, ಬೆಂಗಳೂರು–86. | ಸದಸ್ಯರು |
| 17. | ಕಾರ್ಯನಿರ್ವಾಹಕ ಇಂಜಿನಿಯರ್ ಕಛೇರಿ, ಉತ್ತರ–ಪಶ್ಚಿಮ–2 (ವಾಯವ್ಯ–2) ವಿಭಾಗ, BWSSB, ಸುವರ್ಣ ಭವನ, 1ನೇ ಮಹಡಿ, 18ನೇ ಮುಖ್ಯರಸ್ತೆ, ಮಲ್ಲೇಶ್ವರಂ, ಬೆಂಗಳೂರು–55. | ಸದಸ್ಯರು |
| 18. | ಕಾರ್ಯನಿರ್ವಾಹಕ ಇಂಜಿನಿಯರ್ ಕಛೇರಿ, ದಕ್ಷಿಣ–ಪೂರ್ವ–2 (ಆಗ್ನೇಯ–2) ವಿಭಾಗ, BWSSB, ಕಪಿಲ ಭವನ, 1ನೇ ಮುಖ್ಯರಸ್ತೆ, 36ನೇ ಅಡ್ಡರಸ್ತೆ, 'ಟಿ' ಬ್ಲಾಕ್, ಜಯನಗರ, ಅಂಚೆ ಕಛೇರಿ ಸಮೀಪ, ಬೆಂಗಳೂರು. | ಸದಸ್ಯರು |
| 19. | ಕಾರ್ಯ ನಿರ್ವಾಹಕ ಇಂಜಿನಿಯರ್ ಕಛೇರಿ, ನಿರ್ವಹಣೆ & ಯೋಜನೆ–12 ವಿಭಾಗ, BWSSB, ನಾಗರಬಾವಿ, 80 ಅಡಿ ರಸ್ತೆ, ಜಿ.ಎಲ್.ಆರ್ ಆವರಣ, ಬಿಡಿಎ ಕಾಂಪ್ಲೆಕ್ಸ್ ಹತ್ತಿರ, ಬೆಂಗಳೂರು. | ಸದಸ್ಯರು |
| 20. | ಕಾರ್ಯ ನಿರ್ವಾಹಕ ಇಂಜಿನಿಯರ್ ಕಛೇರಿ, ನಿರ್ವಹಣೆ & ಯೋಜನೆ–13 ವಿಭಾಗ, BWSSB, ಹೂಡಿ, ಜಿ.ಎಲ್.ಆರ್ ಆವರಣ, ಕುಂದಲಹಳ್ಳಿ–ಹೂಡಿ ಮುಖ್ಯರಸ್ತೆ, ಬೆಂಗಳೂರು–48. | ಸದಸ್ಯರು |
| 21. | ಕಾರ್ಯ ನಿರ್ವಾಹಕ ಇಂಜಿನಿಯರ್ ಕಛೇರಿ, ನಿರ್ವಹಣೆ & ಯೋಜನೆ–14 ವಿಭಾಗ, BWSSB, ಪಿನಾಕಿನಿ ಭವನ, 1ನೇ ಮಹಡಿ, ದೊಡ್ಡಬಳ್ಳಾಪುರ ಮುಖ್ಯರಸ್ತೆ, ಯಲಹಂಕ, ಬೆಂಗಳೂರು–64. | ಸದಸ್ಯರು |
| 22. | ಕಾರ್ಯ ನಿರ್ವಾಹಕ ಇಂಜಿನಿಯರ್ ಕಛೇರಿ, ನಿರ್ವಹಣೆ & ಯೋಜನೆ–15 ವಿಭಾಗ, BWSSB, ಅಂಜನಾಪುರ ಮುಂದುವರೆದ ಬಡಾವಣೆ, 11ನೇ ಬ್ಲಾಕ್, ಬೆಂಗಳೂರು–64. | ಸದಸ್ಯರು |

| | | |
|---|---|---|
| 23. | ಕಾರ್ಯ ನಿರ್ವಾಹಕ ಇಂಜಿನಿಯರ್ ಕಛೇರಿ, (ಪಂಪಿಂಗ್ ಸ್ಟೇಷನ್ & ಬೋರ್‌ವೆಲ್) ವಿಭಾಗ, BWSSB, ಸುವರ್ಣ ಭವನ, 1ನೇ ಮಹಡಿ, 18ನೇ ಮುಖ್ಯರಸ್ತೆ, ಮಲ್ಲೇಶ್ವರಂ, ಬೆಂಗಳೂರು-55. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಎಂ.ಎಸ್ ಜ್ಯೋತಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ.

<u>ಸಂಕಲನಕಾರರು:</u>

ಕರ್ನಾಟಕ ರಾಜ್ಯ ಪತ್ರ ಬೆಂಗಳೂರು – ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿ 100 ಪ್ರತಿಗಳನ್ನು ಸಲ್ಲಿಸುವುದು.

ಇವರಿಗೆ:

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು, ವಿಧಾನಸೌಧ, ಬೆಂಗಳೂರು.
3. ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು / ಕಾರ್ಯದರ್ಶಿಗಳು.
4. ನಿರ್ದೇಶಕರು, ಅಂತರ್ಜಲ ನಿರ್ದೇಶನಾಲಯ, ಬೆಂಗಳೂರು.
5. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.
6. ಪ್ರಾದೇಶಿಕ ನಿರ್ದೇಶಕರು, ಕೇಂದ್ರೀಯ ಅಂತರ್ಜಲ ಮಂಡಳಿ, ಭಾರತ ಸರ್ಕಾರ, ಬೆಂಗಳೂರು.
7. ಕೃಷಿ ಆಯುಕ್ತರು / ನಿರ್ದೇಶಕರು, ಕೃಷಿ ಇಲಾಖೆ, ಬೆಂಗಳೂರು.
8. ಅಧ್ಯಕ್ಷರು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು.
9. ಮುಖ್ಯಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಬೆಂಗಳೂರು.
10. ಮುಖ್ಯಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಆನಂದರಾವ್ ವೃತ್ತ, ಬೆಂಗಳೂರು.
11. ಮುಖ್ಯ ಮಹಾಪ್ರಬಂಧಕರು, ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್, ಬೆಂಗಳೂರು.
12. ಮುಖ್ಯ ಇಂಜಿನಿಯರ್, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು.
13. ಮುಖ್ಯಇಂಜಿನಿಯರ್, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು.
14. ಪ್ರಧಾನ ಇಂಜಿನಿಯರ್, (ದ) ವಲಯ, ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ, ಬೆಂಗಳೂರು.
15. ಮುಖ್ಯ ಇಂಜಿನಿಯರ್, (ಉ) ವಲಯ, ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ, ವಿಜಯಪುರ.
16. ಎಲ್ಲಾ ಜಿಲ್ಲೆಯ ಜಿಲ್ಲಾಧಿಕಾರಿಗಳು / ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯಕಾರ್ಯನಿರ್ವಹಣಾಧಿಕಾಗಳು / ಎಲ್ಲಾ ಇಲಾಖಾ ಮುಖ್ಯಸ್ಥರು.
17. ಎಲ್ಲಾ ಜಿಲ್ಲೆಯ ಪೋಲೀಸ್‌ಅಧೀಕ್ಷಕರು.
18. ಮಾನ್ಯ ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.

19. ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಲೋಕೋಪಯೋಗಿಆರ್ಥಿಕ ಕೋಶ), ವಿಧಾನಸೌಧ, ಬೆಂಗಳೂರು.
20. ನಿರ್ದೇಶಕರು, ಖಜಾನೆ ಇಲಾಖೆ, ಮೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯಗೋಪುರ, ಬೆಂಗಳೂರು.
21. ಶಾಖಾ ರಕ್ಷಾಕಡತ / ಹೆಚ್ಚುವರಿ ಪ್ರತಿಗಳು.



ಕರ್ನಾಟಕ ಸರ್ಕಾರ

ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ

ಸಂಖ್ಯೆ:ಸನೀಇ 19 ಅಜಅ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, 2ನೇ ಮಹಡಿ,
ಬೆಂಗಳೂರು, ದಿನಾಂಕ:17.04.2021.



## ಅಧಿಸೂಚನೆ

ರಾಜ್ಯದಲ್ಲಿ ಅಂತರ್ಜಲ ಅಭಿವೃದ್ಧಿ ಮತ್ತು ಅತಿಬಳಕೆ ನಿಯಂತ್ರಣ ಕುರಿತು ಜಾರಿಯಾಗಿರುವ ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣ) ಅಧಿನಿಯಮ 2011 ರ 3ನೇ ಪ್ರಕರಣ 1ನೇ ಉಪ ಪ್ರಕರಣದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಅಂತರ್ಜಲ ಪ್ರಾಧಿಕಾರವನ್ನು ರಚಿಸಲಾಗಿದೆ. ಸದರಿ ಅಧಿನಿಯಮವನ್ನು ಅನುಷ್ಠಾನಗೊಳಿಸಲು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಎಂಟು ಸದಸ್ಯರಿರುವ ಜಿಲ್ಲಾ ಮಟ್ಟದ ಸಮಿತಿಗಳನ್ನು ರಚಿಸಿ, ಉಪನಿರ್ದೇಶಕರು / ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ಅಧಿಸೂಚನೆ ಸಂಖ್ಯೆ:ಸನೀಇ 13 ಅಜಅ 2011, ದಿನಾಂಕ:31.12.2012ರಲ್ಲಿ ಹೊರಡಿಸಿರುವುದನ್ನು ಹಿಂಪಡೆದು ಆಯಾ ಜಿಲ್ಲೆಗೆ ಸಂಬಂಧಿಸಿದ ಹಿರಿಯ ಭೂವಿಜ್ಞಾನಿ, ಜಿಲ್ಲಾ ಅಂತರ್ಜಲ ಕಛೇರಿ, ಅಂತರ್ಜಲ ನಿರ್ದೇಶನಾಲಯ ಇವರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸಲು ಪರಿಷ್ಕೃತ ಸಮಿತಿಯನ್ನು ಈ ಕೆಳಕಂಡಂತೆ ರಚಿಸಲಾಗಿದೆ.

| | | |
|---|---|---|
| 1. | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಮುಖ್ಯಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ | ಉಪಾಧ್ಯಕ್ಷರು |
| 3. | ಹಿರಿಯ ಭೂವಿಜ್ಞಾನಿ, ಜಿಲ್ಲಾ ಅಂತರ್ಜಲ ಕಛೇರಿ, ಅಂತರ್ಜಲ ನಿರ್ದೇಶನಾಲಯ | ಸದಸ್ಯ ಕಾರ್ಯದರ್ಶಿ |
| 4. | ಜಿಲ್ಲಾ ಪೋಲೀಸ್ ಅಧೀಕ್ಷಕರು | ಸದಸ್ಯರು |
| 5. | ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ | ಸದಸ್ಯರು |
| 6. | ಕಾರ್ಯಪಾಲಕ ಇಂಜಿನಿಯರ್, ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ | ಸದಸ್ಯರು |
| 7. | ಕಾರ್ಯಪಾಲಕ ಇಂಜಿನಿಯರ್, ಕರ್ನಾಟಕ ವಿದ್ಯುತ್ ಪ್ರಸರಣ ಕಂಪನಿ ನಿಯಮಿತ | ಸದಸ್ಯರು |
| 8. | ಪರಿಸರ ಅಧಿಕಾರಿಗಳು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಎಂ.ಎಸ್. ಜ್ಯೋತಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ

ಸಂಕಲನಕಾರರು:

ಕರ್ನಾಟಕ ರಾಜ್ಯ ಪತ್ರ ಬೆಂಗಳೂರು – ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿ 100 ಪ್ರತಿಗಳನ್ನು ಸಲ್ಲಿಸುವುದು.

...2...

**ಇವರಿಗೆ:**

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು, ವಿಧಾನಸೌಧ, ಬೆಂಗಳೂರು.
3. ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು / ಕಾರ್ಯದರ್ಶಿಗಳು.
4. ನಿರ್ದೇಶಕರು, ಅಂತರ್ಜಲ ನಿರ್ದೇಶನಾಲಯ, ಬೆಂಗಳೂರು.
5. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.
6. ಪ್ರಾದೇಶಿಕ ನಿರ್ದೇಶಕರು, ಕೇಂದ್ರೀಯ ಅಂತರ್ಜಲ ಮಂಡಳಿ, ಭಾರತ ಸರ್ಕಾರ, ಬೆಂಗಳೂರು.
7. ಆಯುಕ್ತರು, ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ, ಬೆಂಗಳೂರು.
8. ಕೃಷಿ ಆಯುಕ್ತರು / ನಿರ್ದೇಶಕರು, ಕೃಷಿ ಇಲಾಖೆ, ಬೆಂಗಳೂರು.
9. ಅಧ್ಯಕ್ಷರು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು.
10. ಮುಖ್ಯಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಬೆಂಗಳೂರು.
11. ಮುಖ್ಯಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಆನಂದರಾವ್ ವೃತ್ತ, ಬೆಂಗಳೂರು.
12. ಮುಖ್ಯ ಮಹಾಪ್ರಬಂಧಕರು, ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್, ಬೆಂಗಳೂರು.
13. ಮುಖ್ಯ ಇಂಜಿನಿಯರ್, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು.
14. ಮುಖ್ಯ ಇಂಜಿನಿಯರ್, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು.
15. ಪ್ರಧಾನ ಇಂಜಿನಿಯರ್, (ದ) ವಲಯ, ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ, ಬೆಂಗಳೂರು.
16. ಮುಖ್ಯ ಇಂಜಿನಿಯರ್, (ಉ) ವಲಯ, ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ, ವಿಜಯಪುರ.
17. ಎಲ್ಲಾ ಜಿಲ್ಲೆಯ ಜಿಲ್ಲಾಧಿಕಾರಿಗಳು / ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯಕಾರ್ಯನಿರ್ವಹಣಾಧಿಕಾಗಳು / ಎಲ್ಲಾ ಇಲಾಖಾ ಮುಖ್ಯಸ್ಥರು.
18. ಎಲ್ಲಾ ಜಿಲ್ಲೆಯ ಪೋಲೀಸ್ ಅಧೀಕ್ಷಕರು.
19. ಮಾನ್ಯ ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆಯ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
20. ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಲೋಕೋಪಯೋಗಿಆರ್ಥಿಕ ಕೋಶ), ವಿಧಾನಸೌಧ, ಬೆಂಗಳೂರು.
21. ನಿರ್ದೇಶಕರು, ಖಜಾನೆ ಇಲಾಖೆ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು.
22. ಶಾಖಾ ರಕ್ಷಾಕಡತ / ಹೆಚ್ಚುವರಿ ಪ್ರತಿಗಳು.

ಅನುಬಂಧ-4

ಕಳೆದ 5 ವರ್ಷಗಳಲ್ಲಿ ಅನಧಿಕೃತವಾಗಿ ಕೊಳವೆಬಾವಿ ಕೊರೆಯುವುದರ ಮೇಲೆ ವಿಧಿಸಿದ ದಂಡದ ವಿವರಗಳು

| ಕ್ರ. ಸಂ. | ಜಿಲ್ಲೆಗಳು | ಅನುಮತಿ ಇಲ್ಲದೇ ಕೊಳವೆಬಾವಿಗಳನ್ನು ಕೊರೆದ ರಿಗ್ ಯಂತ್ರಗಳ ಮೇಲೆ ವಿಧಿಸಿದ ದಂಡದ ವಿವರ | | ಅನುಮತಿ ಇಲ್ಲದೇ ಕೊಳವೆಬಾವಿ ಕೊರೆದವರ ಮೇಲೆ ವಿಧಿಸಿದ ದಂಡ | |
|---|---|---|---|---|---|
| | | ವಾಹನಗಳ ಸಂಖ್ಯೆ | ದಂಡದ ಮೊತ್ತ ರೂ.ಗಳಲ್ಲಿ | ದಂಡ ವಿಧಿಸಿದ ಪ್ರಕರಣಗಳ ಸಂಖ್ಯೆ | ದಂಡದ ಮೊತ್ತ ರೂ.ಗಳಲ್ಲಿ |
| 1 | 2 | 3 | 4 | 5 | 6 |
| 1 | ಬೆಂಗಳೂರು ನಗರ | 195 | 1455000 | 602 | 2455300 |
| 2 | ಬೆಂಗಳೂರು ಗ್ರಾಮಾಂತರ | 6 | 30000 | 26 | 68800 |
| 3 | ಬೆಳಗಾವಿ | 97 | 900000 | 0 | 0 |
| 4 | ಬಳ್ಳಾರಿ | 11 | 105000 | 231 | 231000 |
| 5 | ಬೀದರ್ | 1 | 5000 | 0 | 0 |
| 6 | ಬಾಗಲಕೋಟೆ | 34 | 190000 | 0 | 0 |
| 7 | ಚಾಮರಾಜನಗರ | 40 | 289040 | 68 | 136100 |
| 8 | ಚಿಕ್ಕಬಳ್ಳಾಪುರ | 8 | 32000 | 2258 | 2758756 |
| 9 | ಚಿಕ್ಕಮಗಳೂರು | 0 | 0 | 12 | 60010 |
| 10 | ಚಿತ್ರದುರ್ಗ | 40 | 255000 | 2617 | 2617000 |
| 11 | ದಾವಣಗೆರೆ | 16 | 130000 | 986 | 986000 |
| 12 | ಧಾರವಾಡ | 23 | 120000 | 0 | 0 |
| 13 | ಗದಗ | 5 | 45000 | 331 | 331000 |
| 14 | ಹಾಸನ | 48 | 490000 | 25 | 50000 |
| 15 | ಹಾವೇರಿ | 17 | 135000 | 0 | 0 |
| 16 | ಕಲಬುರಗಿ | 2 | 10000 | 0 | 0 |
| 17 | ಕೋಲಾರ | 45 | 285000 | 1402 | 1402000 |
| 18 | ಕೊಪ್ಪಳ | 48 | 460000 | 0 | 0 |
| 19 | ಕಾರವಾರ | 2 | 10000 | 0 | 0 |
| 20 | ಕೊಡಗು | 2 | 10000 | 0 | 0 |
| 21 | ಮೈಸೂರು | 97 | 570000 | 0 | 0 |
| 22 | ಮಂಡ್ಯ | 32 | 205000 | 0 | 0 |
| 23 | ಮಂಗಳೂರು | 13 | 125000 | 0 | 0 |
| 24 | ಶಿವಮೊಗ್ಗ | 2 | 15000 | 0 | 0 |
| 25 | ರಾಮನಗರ | 13 | 69000 | 354 | 265550 |
| 26 | ರಾಯಚೂರು | 23 | 200000 | 0 | 0 |
| 27 | ತುಮಕೂರು | 32 | 204000 | 2629 | 2773700 |
| 28 | ಉಡುಪಿ | 1 | 10000 | 0 | 0 |
| 29 | ವಿಜಯಪುರ | 45 | 250000 | 0 | 0 |
| 30 | ಯಾದಗಿರಿ | 16 | 140000 | 0 | 0 |
| | ಒಟ್ಟು | **914** | **6744040** | **11541** | **14135216** |

ಟಿಪ್ಪಣಿ: ಪ್ರಕರಣಗಳ ಒಟ್ಟು ಸಂಖ್ಯೆ: 12455 ಮತ್ತು ಒಟ್ಟು ದಂಡದ ಮೊತ್ತ ರೂ. 2,08,79,256.00